# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 01. | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1479 |
| 02. | ಸದಸ್ಯರ ಹೆಸರು | : | ಶ್ರೀ ಸಲೀಂ ಅಹಮದ್<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 03. | ಉತ್ತರಿಸುವ ದಿನಾಂಕ | : | 10.03.2022 |
| 04. | ಉತ್ತರಿಸುವ ಸಚಿವರು | : | ಮಾನ್ಯ ಗೃಹ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಗೃಹ ಇಲಾಖೆಯಲ್ಲಿ ಹಾಲಿ ಇರುವ ಸಿಬ್ಬಂದಿಗಳು ಪ್ರಸ್ತುತ ಇರುವ ಜನಸಂಖ್ಯೆಗೆ ಅನುಗುಣವಾಗಿ ಇದೆಯೇ; | ಕರ್ನಾಟಕ ರಾಜ್ಯ ಜನಸಂಖ್ಯೆಯು 2011ರ ಜನಗಣತಿಯಂತೆ 6,10,95,297 ಇರುತ್ತದೆ ಹಾಗೂ ರಾಜ್ಯದಲ್ಲಿ ಮಂಜೂರಾಗಿರುವ ಪೊಲೀಸ್ ಅಧಿಕಾರಿ / ಸಿಬ್ಬಂದಿಗಳ ಸಂಖ್ಯೆ 1,05,864 ಗಳಿರುತ್ತದೆ. ಅಂದರೆ ರಾಜ್ಯದಲ್ಲಿರುವ ಜನಸಂಖ್ಯೆಗೆ ಪೊಲೀಸರ ಅನುಪಾತವು 577 ಇರುತ್ತದೆ.<br>ರಾಷ್ಟ್ರ ಮಟ್ಟದಲ್ಲಿ ಜನ ಸಂಖ್ಯೆ ಪೊಲೀಸ್‌ರ ಅನುಪಾತವು 568 ಇರುತ್ತದೆ. |
| ಆ) | ಕಾನೂನು ಸುವ್ಯವಸ್ಥೆ ಕಾಪಾಡಲು ಆಧುನಿಕ ತಂತ್ರಜ್ಞಾನ ವ್ಯವಸ್ಥೆಯನ್ನು ಇಲಾಖೆಗೆ ಬಳಸಿಕೊಳ್ಳಲು ಸರ್ಕಾರಕ್ಕೆ ಇರುವ ಸಮಸ್ಯೆಗಳೇನು; | ಕಾನೂನು ಸುವ್ಯವಸ್ಥೆ ಕಾಪಾಡಲು ಆಧುನಿಕ ತಂತ್ರಜ್ಞಾನ ವ್ಯವಸ್ಥೆಯನ್ನು ಪೊಲೀಸ್ ಇಲಾಖೆಯಲ್ಲಿ ಬಳಸಲು ಸರ್ಕಾರವು ಈಗಾಗಲೇ ಹಲವಾರು ಕ್ರಮಗಳನ್ನು ಕೈಗೊಂಡಿದೆ.<br>ಈ ಕೆಳಕಂಡ ಅಂಶಗಳಿಂದಾಗಿ ಆಧುನಿಕ ತಂತ್ರಜ್ಞಾನ ಬಳಸಿಕೊಳ್ಳಲು ಇಲಾಖೆಗೆ ಯಾವುದೇ ಸಮಸ್ಯೆಗಳಿರುವುದಿಲ್ಲ.<br>1) ಕರ್ನಾಟಕ ರಾಜ್ಯಾದ್ಯಂತರ ಡಯಲ್-112 ಅತ್ಯಾಧುನಿಕ ಗಸ್ತು ವ್ಯವಸ್ಥೆಯನ್ನು ಹೊಯ್ಸಳ ವಾಹನಗಳ ಮೂಲಕ ಬೆಂಗಳೂರಿನಲ್ಲಿ ಸ್ಥಾಪಿಸಿರುವ PSAP(Public Safety Answering Point) ಮುಖಾಂತರ 24*7 ರಿಯಲ್ ಟೈಂ ಅಡಿಯಲ್ಲಿ ಸೇವೆಗಳನ್ನು ಸಲ್ಲಿಸಲಾಗುತ್ತಿದೆ. ನಗರ ಪ್ರದೇಶಗಳಲ್ಲಿ ಈಗಾಗಲೇ ಗಸ್ತು ವಾಹನಗಳು ಆಧುನಿಕ ತಂತ್ರಜ್ಞಾನ ವ್ಯವಸ್ಥೆ ಆಧಾರದ ಮೇಲೆ 20 ನಿಮಿಷಗಳ ಒಳಗಾಗಿ ಸಂಕಷ್ಟದಲ್ಲಿರುವ ಸಾರ್ವಜನಿಕ ದೂರುಗಳಿಗೆ ಸ್ಪಂದಿಸಲು ಅನುವು ಮಾಡಿಕೊಡಲಾಗಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಸರಾಸರಿ 40 ನಿಮಿಷಗಳೊಳಗಾಗಿ ಸ್ಪಂದಿಸುತ್ತಿದ್ದು, ಸದರಿ ಗಸ್ತು ವ್ಯವಸ್ಥೆಯನ್ನು ಇನ್ನಷ್ಟು ಬಲವರ್ಧನೆ ಗೊಳಿಸಲು ಕ್ರಮ ಜರುಗಿಸಲಾಗುವುದು.<br>2) ಸೇಫ್ ಸಿಟಿ ಮತ್ತು ಸ್ಮಾರ್ಟ್ ಸಿಟಿ ಯೋಜನೆಯಡಿ ರಾಜ್ಯದ ವಿವಿಧ ನಗರಗಳಲ್ಲಿ ಸಿಸಿಟಿವಿ ಗಳನ್ನು ಮುಂದಿನ ವರ್ಷಗಳಲ್ಲಿ ಅಳವಡಿಸಿ ಸಾರ್ವಜನಿಕ ಪ್ರದೇಶಗಳಲ್ಲಿ ರಕ್ಷಣಾ ವ್ಯವಸ್ಥೆಯನ್ನು ಸುಧಾರಿಸಲಾಗುವುದು.<br>3) ಪೊಲೀಸ್ ಗಣಕೀಕರಣ ಯೋಜನೆಯನ್ನು ಸಿ.ಸಿ.ಟಿ.ಎನ್.ಎಸ್ ಮತ್ತು ಐ.ಸಿ.ಜೆ.ಎಸ್ ಯೋಜನೆಯಡಿಯಲ್ಲಿ ರಾಜ್ಯದ ಪ್ರತಿಯೊಂದು ಪೊಲೀಸ್ ಠಾಣೆಗಳನ್ನು ಗಣಕೀಕರಣ ಮಾಡಿ ಪೊಲೀಸ್ ಆಡಳಿತ ವ್ಯವಸ್ಥೆಯಲ್ಲಿ ಸುಧಾರಣೆ ತರಲಾಗಿದೆ. |

..2

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| | | 4) ರಾಜ್ಯದಲ್ಲಿ ನ್ಯಾಯ ವಿಜ್ಞಾನ ಪ್ರಯೋಗಾಲಯ ಗಳನ್ನು ಬಲಗೊಳಿಸಿರುವುದಲ್ಲದೇ, ಹೊಸದಾಗಿ ಪ್ರಾದೇಶಿಕ ನ್ಯಾಯ ವಿಜ್ಞಾನ ಪ್ರಯೋಗಾಲಯಗಳನ್ನು ಹುಬ್ಬಳ್ಳಿ ಮತ್ತು ಬಳ್ಳಾರಿ ನಗರಗಳಲ್ಲಿ ಸ್ಥಾಪಿಸಲು ಸಹಮತಿ ನೀಡಿದೆ.<br>ಕರ್ನಾಟಕ ರಾಜ್ಯದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಕಾಪಾಡಲು ವಿಶೇಷ ಗಮನ ಹರಿಸಿ, ಆದ್ಯತೆ ಮೇರೆಗೆ ಬೇರೆ ಬೇರೆ ಕಾರ್ಯ ಕ್ರಮಗಳನ್ನು ಕೈಗೊಂಡಿದ್ದು, ಅವುಗಳನ್ನು ಪ್ರತಿ ವರ್ಷವು ಯೋಜನೆಯಂತೆ ಮುಂದುವರೆಸಲಾಗುತ್ತಿದೆ. |
| ಇ) | ಗೃಹ ಇಲಾಖೆಯನ್ನು ಬಲಗೊಳಿಸಲು ಮತ್ತು ಸಿಬ್ಬಂದಿಯನ್ನು ನೇಮಕ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಇಲಾಖೆಯಲ್ಲಿ ನಿರಂತರವಾಗಿ ನೇಮಕಾತಿ ಪ್ರಕ್ರಿಯೆ ಕೈಗೊಂಡು, ರಿಕ್ತ ಮತ್ತು ರಿಕ್ತವಾಗಲಿರುವ ಹುದ್ದೆಗಳನ್ನು ಗುರುತಿಸಿ ನೇಮಕಾತಿ ಮಾಡಲಾಗುತ್ತಿದೆ. ಅಲ್ಲದೇ ಕಳೆದ 6 ವರ್ಷಗಳಲ್ಲಿ ಪಿ.ಎಸ್.ಐ 3,365 ಮತ್ತು ಪೊಲೀಸ್ ಕಾನ್ಸ್‌ಟೇಬಲ್ 35,521 ಹುದ್ದೆಗಳನ್ನು ಭರ್ತಿ ಮಾಡಲಾಗಿರುತ್ತದೆ. |

HD/40/PPS/2022

(ಆರಗ ಜ್ಞಾನೇಂದ್ರ)
ಮಾನ್ಯ ಗೃಹ ಸಚಿವರು